ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ರಾಜ್ಯದಲ್ಲಿ ಕೋವಿಡ್-19ರ ಚಿಕಿತ್ಸೆ ಮತ್ತು ಅದರಿಂದಾಗುತ್ತಿರುವ ಅಡ್ಡಪರಿಣಾಮದ ಕುರಿತು

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು):-

797 (925) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಕೋವಿಡ್ ಸೋಂಕಿಗೆ ತುತ್ತಾದವರ ಸಂಖ್ಯೆ ಎಷ್ಟು; ಅವರಲ್ಲಿ ಸರ್ಕಾರಿ ಮತ್ತು ಖಾಸÀಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಪಡೆದವರ ಸಂಖ್ಯೆ ಎಷ್ಟು ; ರೋಗ ಲಕ್ಷಣವಿಲ್ಲದೆ ವೈದ್ಯರ ಸಲಹೆಯ ಮೇರೆಗೆ ಮನೆಯಲ್ಲಿಯೇ ಚಿಕಿತ್ಸೆ ಪಡೆದವರ ಸಂಖ್ಯೆ ಎಷ್ಟು ; ಇವರಲ್ಲಿ ಎ.ಪಿ.ಎಲ್. ಮತ್ತು ಬಿ.ಪಿ.ಎಲ್ ಕುಟುಂಬಗಳ ಸಂಖ್ಯೆ ಎಷ್ಟು ; ಸರ್ಕಾರಿ ನೌಕರರ ಸಂಖ್ಯೆ ಎಷ್ಟು ; (ಜಿಲ್ಲಾವಾರು ವಿವರ ನೀಡುವುದು)

(ಆ) ರಾಜ್ಯದಲ್ಲಿ ಕೋವಿಡ್-19ರ ನಿಯಂತ್ರಣಕ್ಕಾಗಿ ಜನರಲ್ಲಿ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಲು ಸರ್ಕಾರದಿಂದ ಕೈಗೊಳ್ಳಲಾದ ಕ್ರಮಗಳಾವುವು ; ರೋಗ ಲಕ್ಷಣವಿಲ್ಲದಿರುವ ಸೋಂಕಿತರಿಗೆ ಸರ್ಕಾರದಿಂದ ನೀಡಲಾಗುತ್ತಿರುವ ಚಿಕಿತ್ಸಾ ವಿಧಾನಗಳು ಯಾವುವು; (ವಿವರ ನೀಡುವುದು)

(ಇ) ಕೋವಿಡ್-19ರ ಸೋಂಕಿತರಿಗೆ ನೀಡಲಾಗುತ್ತಿರುವ ಚಿಕಿತ್ಸೆಯ ಅಡ್ಡಪರಿಣಾಮ (Side effects) ವಾಗಿ ರಕ್ತದೊತ್ತಡ ಮತ್ತು ಮಧುಮೇಹಗಳು ಬರುತ್ತದೆ ಎಂದು ಸೋಂಕಿನಿಂದ ಚಿಕಿತ್ಸೆ ಪಡೆದು ಗುಣಮುಖರಾದವರಿಂದ ಅಭಿಪ್ರಾಯ ವ್ಯಕ್ತವಾಗುತ್ತಿರುವುದು ನಿಜವೇ ; ಈ ಕುರಿತು ಪರೀಕ್ಷೆ ನಡೆಸಲಾಗಿದಯೇ ; ಹೌದಾದರೆ, ಸರ್ಕಾರದ ಶೂಶ್ರುಷೆ ಕ್ರಮದಲ್ಲಿ ಬದಲಾವಣೆ ಮಾಡಲಾಗಿದೆಯೇ?